# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 90

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 13.12.2021

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಅನ್ನಭಾಗ್ಯ ಯೋಜನೆಯಡಿಯಲ್ಲಿ ವಿತರಿಸಲಾಗುತ್ತಿರುವ ಅಕ್ಕಿಯನ್ನು ಅಕ್ರಮವಾಗಿ ಅಕ್ಕಿಗಿರಣಿ (ರೈಸ್ ಮಿಲ್) ಮಾಲೀಕರು ಖರೀದಿಸಿ ಮತ್ತೆ ಪಾಲಿಸ್ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| (ಆ) | ಹಾಗಿದ್ದಲ್ಲಿ, ಈ ರೀತಿಯ ಅಕ್ರಮ ತಡೆಗಟ್ಟಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಸಾರ್ವಜನಿಕ ವಿತರಣಾ ಪದ್ಧತಿಯನ್ನು ಜಾರಿಗೆ ತರಲು ಎಲ್ಲಾ ಫಲಾನುಭವಿಗಳ ಮಾಹಿತಿಯನ್ನು ಅವರ ಆಧಾರ್ ನೋಂದಣಿಗೆ ಜೋಡಣೆ ಮಾಡಿದ್ದು ಸಂಪೂರ್ಣ ಆನ್‌ಲೈನ್ ದತ್ತಾಂಶ ಜಾರಿಗೊಳಿಸಲಾಗಿದೆ ಹಾಗೂ ಪ್ರತೀ ಮಾಹೆಯ ಸಂಪೂರ್ಣ ವಿತರಣೆಯನ್ನು ನ್ಯಾಯಬೆಲೆ ಅಂಗಡಿ ಮಟ್ಟದಲ್ಲಿ ಆಧಾರ್(ಪಾಸ್) ಮೂಲಕ ವಿತರಿಸುವಂತೆ ಜಾರಿಗೊಳಿಸಲಾಗಿದೆ. ಅಕ್ರಮ ದಾಸ್ತಾನು, ಮತ್ತು ಕಾಳಸಂತೆ ವಹಿವಾಟುಗಳು ನಡೆಯುವುದನ್ನು ತಡೆಗಟ್ಟಿ ನಿರ್ದಿಷ್ಟ ಫಲಾನುಭವಿಗಳಿಗೆ ಪಡಿತರ ಆಹಾರ ಧಾನ್ಯಗಳು ತಲುಪುವುದನ್ನು ಖಾತರಿ ಪಡಿಸಿಕೊಳ್ಳಲು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅಗತ್ಯ ವಸ್ತುಗಳ ಕಾಯ್ದೆ 1955 ಮತ್ತು ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013 ರ ಅಡಿಯಲ್ಲಿ ಹೊರಡಿಸಿರುವ ಆದೇಶಗಳಡಿಯಲ್ಲಿ ಕಾನೂನು ಕ್ರಮ ಜರುಗಿಸಲು ಆಹಾರ, ನಾಗರಿಕ, ಸರಬರಾಜು ಹಾಗೂ ಗ್ರಾಹಕರ |

| | | |
|---|---|---|
| | | ವ್ಯವಹಾರಗಳ ಇಲಾಖೆಯಲ್ಲಿ ಇಲಾಖೆ ಅಧಿಕಾರಿಗಳನ್ನೊಳಗೊಂಡ ರಾಜ್ಯ ಮಟ್ಟದಲ್ಲಿ ಆಹಾರ ಜಾಗೃತಿ ಮತ್ತು ತನಿಖಾ ದಳವನ್ನು ರಚಿಸಲಾಗಿದೆ.<br><br>ಅಗತ್ಯ ವಸ್ತುಗಳ ಕಾಯ್ದೆಯಡಿ ಒಟ್ಟು 314 ಪ್ರಕರಣಗಳನ್ನು ದಾಖಲಿಸಲಾಗಿದ್ದು, ಈ ಪೈಕಿ 309 ಪ್ರಕರಣಗಳಲ್ಲಿ ಎಫ್.ಐ.ಆರ್ ದಾಖಲಿಸಲಾಗಿದೆ. ಅಂದಾಜು ರೂ. 8,23,78,691.16 ಮೌಲ್ಯದ ಒಟ್ಟು 38,530.67 ಕ್ವಿಂಟಾಲ್ ಅಕ್ಕಿ, 538.64 ಕ್ವಿಂ. ಗೋಧಿ ವಶಪಡಿಸಿಕೊಳ್ಳಲಾಗಿದೆ.<br><br>ರಾಜ್ಯ ಮಟ್ಟದ ಆಹಾರ ಜಾಗೃತಿ ಮತ್ತು ತನಿಖಾ ದಳವು 21 ಪ್ರಕರಣಗಳನ್ನು ಪತ್ತೆ ಹಚ್ಚಿ 12,868.87 ಕ್ವಿಂ. ಸಾರ್ವಜನಿಕ ಪಡಿತರ ವ್ಯವಸ್ಥೆಗೆ ಸೇರಿದ ಅಕ್ಕಿ, 50.26 ಕ್ವಿಂಟಾಲ್ ಗೋಧಿ ಹಾಗೂ 507.71 ಕ್ವಿಂಟಾಲ್ ರಾಗಿಯನ್ನು ವಶಪಡಿಸಿಕೊಂಡಿದ್ದು, ಸದರಿ ಆಹಾರಧಾನ್ಯಗಳ ಮೌಲ್ಯ ರೂ. 5,80,49,312 ಆಗಿರುತ್ತದೆ. ಹಾಗೂ ಅಕ್ರಮ ವ್ಯವಹಾರ ನಡೆಸಿರುವ ಆರೋಪಿತರ ವಿರುದ್ಧ ಎಫ್.ಐ.ಆರ್. ದಾಖಲಿಸಲಾಗಿದೆ. |
| (ಇ) | ಈ ರೀತಿಯ ಅಕ್ರಮದಲ್ಲಿ ಭಾಗಿಯಾಗಿರುವವರ ವಿರುದ್ಧ ಸರ್ಕಾರ ಕೈಗೊಂಡರುವ ಕ್ರಮಗಳೇನು ?(ವಿವರ ನೀಡುವುದು) | 335 ಪ್ರಕರಣಗಳು ವಿಚಾರಣೆ ಹಂತದಲ್ಲಿವೆ. |

ಆನಾಸ 283 ಡಿಆರ್ಎ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು